ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಕೆರೆಗಳ ಒತ್ತುವರಿ ಕುರಿತು

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

273 (492) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಕೆರೆಗಳಾವುವು; (ಅವುಗಳ ವಿಸ್ತೀರ್ಣ, ಕ್ಯಾಚ್‌ಮೆಂಟ್ ಪ್ರದೇಶ ಮುಂತಾದ ವಿವರಗಳನ್ನು ಸರ್ವೆ ನಂಬರ್, ವಾರ್ಡ್‌ವಾರು, ಮತ ಕ್ಷೇತ್ರವಾರು ವಿವರ ನೀಡುವುದು)

(ಆ) ಪಾಲಿಕೆಯ ಕೆರೆಗಳು ಒತ್ತುವರಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕೆರೆಗಳು ಎಷ್ಟು ಒತ್ತುವರಿಯಾಗಿವೆ; ಒತ್ತುವರಿ ಮಾಡಿರುವವರ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಯಾರು ಯಾವ ಸರ್ವೆ ನಂಬರುಗಳಲ್ಲಿ ಎಷ್ಟು ಕ್ಷೇತ್ರವನ್ನು ಒತ್ತುವರಿ ಮಾಡಿದ್ದಾರೆ; (ವಾರ್ಡ್‌ವಾರು, ಮತಕ್ಷೇತ್ರವಾರು ಸಂಪೂರ್ಣ ವಿವರಗಳನ್ನು ನೀಡುವುದು)

(ಇ) ಕೆರೆಗಳ ಒತ್ತುವರಿಯನ್ನು ತೆರವುಗೊಳಿಸಿ ನಿಗದಿತ ವಿಸ್ತೀರ್ಣದಂತೆ ತಡೆಗೋಡೆಗಳನ್ನು ಹಾಕಿ ಸಂರಕ್ಷಣೆ ಮಾಡಿ ಅಭಿವೃದ್ಧಿಪಡಿಸುವ ಉದ್ದೇಶ ಸರ್ಕಾರಕ್ಕಿದೆಯೇ; ಹಾಗಿದ್ದಲ್ಲಿ, ಸರ್ಕಾರದಿಂದ ಯಾವಾಗ ಕ್ರಮ ಕೈಗೊಳ್ಳಲಾಗುವುದು;

(ಈ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ವಿವಿಧ ಮೂಲಗಳಿಂದ ಸಂಗ್ರಹವಾಗಬೇಕಾದ/ ಸಂಗ್ರಹವಾಗುವ ಪ್ರತಿ ತಿಂಗಳ ಆದಾಯವೆಷ್ಟು? (ವಿವರ ನೀಡುವುದು)